ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 22ನೇ ಸೆಪ್ಟಂಬರ್, 2020

ಶಿವಮೊಗ್ಗ ಜಿಲ್ಲೆಯಲ್ಲಿ ಅಕ್ರಮ ಗಣಿಗಾರಿಕೆ ನಡೆಯುತ್ತಿರುವ ಬಗ್ಗೆ

ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

208 (172) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಶಿವಮೊಗ್ಗ ಜಿಲ್ಲೆಯಲ್ಲಿ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯಿಂದ ಪರವಾನಿಗೆ ಪಡೆಯದೇ ಗಣಿಗಾರಿಕೆ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ರಾಜ್ಯದಲ್ಲಿ ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಯಾವ ರೀತಿ ಕ್ರಮ ಕೈಗೊಳ್ಳಲಾಗಿದೆ;

(ಇ) ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗಿದೆಯೇ; ನಷ್ಟ ಉಂಟಾಗಿದ್ದಲ್ಲಿ ಎಷ್ಟು ಹಣ ನಷ್ಟವಾಗಿರುತ್ತದೆ;

(ಈ) ಮರಳು ಮತ್ತು ಗಣಿಗಾರಿಕೆಗೆ ಅನುಮತಿ ಪಡೆಯಲು ಸರ್ಕಾರದ ಮಾನದಂಡಗಳೇನು ? (ಪ್ರತ್ಯೇಕವಾಗಿ ವಿವರ ನೀಡುವುದು)